# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 640 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೋಟಾ ಶ್ರೀನಿವಾಸ ಪೂಜಾರಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 19-02-2018 |
| ಉತ್ತರಿಸಬೇಕಾದ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು |

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಆರೋಗ್ಯ ಇಲಾಖೆಯ ಮೂಲಕ ಅನುಷ್ಠಾನಗೊಳ್ಳುತ್ತಿರುವ ಕೇಂದ್ರ ಮತ್ತು ರಾಜ್ಯ ಪ್ರಾಯೋಜಿತ ಯೋಜನೆಗಳಾವುವು; | 1. ರಾಷ್ಟ್ರೀಯ ಆರೋಗ್ಯ ಅಭಿಯಾನ.<br>2. ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆ.<br>3. ರಾಷ್ಟ್ರೀಯ ಆಯುಷ್ ಮಿಷನ್.<br>4. ಕರ್ನಾಟಕ ರಾಜ್ಯ ಏಡ್ಸ್ ನಿಯಂತ್ರಣ ಸೊಸೈಟಿ – ಏಡ್ಸ್ ನಿಯಂತ್ರಣ ಕಾರ್ಯಕ್ರಮ<br>5. ಔಷಧ ನಿಯಂತ್ರಣ |
| ಆ) | ಕಳೆದ 4 ವರ್ಷದಲ್ಲಿ ಕೇಂದ್ರ ಮತ್ತು ಇತರ ಮೂಲಗಳಿಂದ ಆರೋಗ್ಯ ಇಲಾಖೆಗೆ ಬಂದ ಅನುದಾನವೆಷ್ಟು; ಖರ್ಚಾದ ಅನುದಾನವೆಷ್ಟು; | 2013-14ನೇ ಸಾಲಿನಿಂದ ಡಿಸೆಂಬರ್-17ನೇ ಸಾಲಿನವರೆಗೆ ಕೇಂದ್ರ ಮತ್ತು ಇತರ ಮೂಲಗಳಿಂದ ಆರೋಗ್ಯ ಇಲಾಖೆಗೆ ಬಂದ ಅನುದಾನದ ವಿವರ (see table below) |

| | ಬಿಡುಗಡೆಯಾದ ಅನುದಾನ | ವೆಚ್ಚವಾದ ಅನುದಾನ |
|---|---|---|
| EAP | 59484.04 | 59484.04 |
| CSS | 336907.42 | 390131.29 |
| | 396391.46 | 449615.33 |

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಇ) | ರಾಜ್ಯದಲ್ಲಿರುವ ಆರೋಗ್ಯ ಉಪಕೇಂದ್ರ- ಪ್ರಾಥಮಿಕ ಆರೋಗ್ಯ ಕೇಂದ್ರ- ಸಮುದಾಯ ಆರೋಗ್ಯ ಕೇಂದ್ರಗಳೆಷ್ಟು; ಮಂಜೂರಾದ-ಕಾರ್ಯ ನಿರ್ವಹಿಸುತ್ತಿರುವ-ಖಾಲಿಯಿರುವ ಹುದ್ದೆಗಳೆಷ್ಟು; (ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ 8871 ಉಪಕೇಂದ್ರಗಳು, 2569 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 206 ಸಮುದಾಯ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ.<br>ಉಪ ಆರೋಗ್ಯ ಕೇಂದ್ರಗಳಲ್ಲಿ ವೈದ್ಯಾಧಿಕಾರಿಗಳು ಇರುವುದಿಲ್ಲ.<br>ಸಮುದಾಯ ಆರೋಗ್ಯ ಕೇಂದ್ರ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆಗಳ ವಿವರಗಳು ಈ ಕೆಳಕಮಡಂತಿದೆ. |

| SL | ಹುದ್ದೆಗಳು | S | W | V |
|---|---|---|---|---|
| 1 | ಸ.ಆ ಕೇಂದ್ರ | 1002 | 481 | 521 |
| 2 | ಪ್ರಾ.ಆ ಕೇಂದ್ರ | 2586 | 1744+733(ಗು) | 109 |

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಈ) | ರಾಜ್ಯದ ಗ್ರಾಮೀಣ ಜನರ ಆರೋಗ್ಯದ ಹಿತದೃಷ್ಟಿಯಿಂದ, ಆರೋಗ್ಯ ಕೇಂದ್ರಗಳ ಮೂಲಸೌಕರ್ಯ, ಸಿಬ್ಬಂದಿ ಕೊರತೆ, ಔಷಧ ಕೊರತೆ ನಿವಾರಿಸುವ ಕುರಿತು ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಸರ್ಕಾರದ ಮುಂದಿರುವ ಯೋಜನೆಗಳೇನು? | ರಾಜ್ಯದ ಗ್ರಾಮೀಣ ಜನರ ಆರೋಗ್ಯದ ಹಿತದೃಷ್ಟಿಯಿಂದ, ಆರೋಗ್ಯ ಕೇಂದ್ರಗಳಿಗೆ ಅಗತ್ಯತೆಗೆ ತಕ್ಕಂತೆ ಈಗಾಗಲೇ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ.<br>ರಾಷ್ಟ್ರೀಯ ಆರೋಗ್ಯ ಅಭಿಯಾನ ಯೋಜನೆಯಡಿಯಲ್ಲಿ ಮುಕ್ತ ನಿಧಿ ಮೊತ್ತವನ್ನು ಉಪಕೇಂದ್ರಕ್ಕೆ ರೂ.20,000/- ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ರೂ.1,75,000/-, ಸಮುದಾಯ ಆರೋಗ್ಯ ಕೇಂದ್ರಗಳಿಗೆ ರೂ.2,25,000/-ಗಳನ್ನು ಆಸ್ಪತ್ರೆಯ ನೈರ್ಮಲ್ಯ, ಸ್ವಚ್ಛತೆ, ಕುಡಿಯುವ ನೀರಿನ ಪೂರೈಕೆ, ವಿದ್ಯುಚ್ಛಕ್ತಿ ಪೂರೈಕೆ, ದುರಸ್ಥಿ ಕಾಮಗಾರಿಗಳಿಗೆ ಬಳಸುವಂತೆ ನಿರ್ದೇಶಿಸಲಾಗಿದೆ. |

| | | |
|---|---|---|
| | | ರಾಜ್ಯದ ಆರೋಗ್ಯ ಕೇಂದ್ರಗಳ ಮೂಲ ಸೌಕರ್ಯಗಳಾದ ಶವಗಾರ ಕಟ್ಟಡ ನಿರ್ಮಾಣಕ್ಕಾಗಿ ರೂ.2445.60 ಲಕ್ಷ ರೂಗಳನ್ನು ಸರ್ಕಾರದಿಂದ ಬಿಡುಗಡೆಗೊಳಿಸಿದೆ<br>ಗ್ರಾಮೀಣ ಪ್ರದೇಶದ ಜನರ ಆರೋಗ್ಯ ಹಿತದೃಷ್ಟಿಯಿಂದ ಕಟ್ಟಡ ನಿರ್ಮಾಣದ ಪ್ರಸ್ತಾವನೆ ಬಂದಲ್ಲಿ ಅನುದಾನ ಲಭ್ಯತೆಗೆ ಅನುಗುಣವಾಗಿ ಸರ್ಕಾರದ ಹಂತದಲ್ಲಿ ಸೂಕ್ತ ಕ್ರಮವಹಿಸಲಾಗುತ್ತಿದೆ.<br>ಇಲಾಖೆಯಲ್ಲಿ ಖಾಲಿ ಇರುವ ಸಿಬ್ಬಂದಿಗಳ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ ಅನುಬಂಧ-1ರಲ್ಲಿ ನೀಡಲಾಗಿದೆ.<br>ಆರೋಗ್ಯ ಸಂಸ್ಥೆಗಳಿಗೆ ಅವರ ಬೇಡಿಕೆಗನುಸಾರ ಔಷಧಿಗಳನ್ನು ಜಿಲ್ಲಾ ಔಷಧ ಉಗ್ರಾಣದಿಂದ ಪೂರೈಸಲಾಗುತ್ತಿದೆ. ಜಿಲ್ಲಾ ಔಷಧ ಉಗ್ರಾಣದಲ್ಲಿ ಯಾವುದಾದರೂ ಲಭ್ಯವಿಲ್ಲದಿದ್ದ ಅವಶ್ಯ ಔಷಧಿಗಳನ್ನು ತುರ್ತು ಸಂದರ್ಭದಲ್ಲಿ ಪೂರೈಸಲು ಆರೋಗ್ಯ ಸಂಸ್ಥೆಯಲ್ಲಿ ಲಭ್ಯವಿರುವ ಯೂಸರ್ ಫಂಡ್ (User Fund) ಹಾಗೂ ಎನ್‌ಹೆಚ್‌ಎಂ ವತಿಯಿಂದ ನೇರವಾಗಿ (Free Drugs Initative) ಅನುದಾನ ಜಿಲ್ಲಾ ಆಸ್ಪತ್ರೆಗೆ -25.00 ಲಕ್ಷ, ತಾಲ್ಲೂಕು ಆಸ್ಪತ್ರೆಗಳಿಗೆ-10.00 ಲಕ್ಷ, ಸಮುದಾಯ ಆರೋಗ್ಯ ಕೇಂದ್ರಗಳಿಗೆ -3.00 ಲಕ್ಷ ಹಾಗೂ ಪ್ರಾ.ಆ ಕೇಂದ್ರಗಳಿಗೆ -50,000/-ಗಳನ್ನು ಬಿಡುಗಡೆ ಮಾಡಲಾಗುತ್ತಿದೆ. ಮುಕ್ತ ನಿಧಿಯಿಂದ ಔಷಧಿಗಳನ್ನು ಖರೀದಿಸಿ ಉಪಯೋಗಿಸಲು ಕ್ರಮಕೈಗೊಳ್ಳಲಾಗುತ್ತಿದೆ. ಒಂದು ವೇಳೆ ಔಷಧಿಗಳಿಗೆ ಹೆಚ್ಚುವರಿ ಬೇಡಿಕೆ ಬಂದಂತಹ ಪಕ್ಷದಲ್ಲಿ ಔಷಧಿಗಳನ್ನು ಇತರೆ ಜಿಲ್ಲಾ ಔಷಧ ಉಗ್ರಾಣಗಳ ಮೂಲಕ ಸರಬರಾಜು ಮಾಡಲು ಸಹ ಕ್ರಮ ಕೈಗೊಳ್ಳಲಾಗುತ್ತಿದೆ. |

**ಕಡತ ಸಂಖ್ಯೆ: ಆಕುಕ 15 ಎಸ್‌ಟಿಕ್ಯೂ 2018**

(ಕೆ.ಆರ್. ರಮೇಶ್ ಕುಮಾರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

ಅನುಬಂಧ 1

# ವಿಶೇಷ ನೇಮಕಾತಿ ಸಮಿತಿಯಿಂದ ಖಾಲಿ ಇರುವ ಹುದ್ದೆಗಳನ್ನು ನೇಮಕಾತಿ ಮಾಡಲು ತೆಗೆದುಕೊಂಡ ಕ್ರಮಗಳು

ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳು ಮತ್ತು ಇತರೆ ಸಿಬ್ಬಂದಿಗಳ ವರ್ಗಾವಣೆಯನ್ನು ಕರ್ನಾಟಕ ನಾಗರೀಕ ಸೇವೆಗಳು (ವೈದ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2011 ಹಾಗೂ ಅದರಡಿ ರಚಿಸಿರುವ ನಿಯಮಗಳನ್ವಯ ಸಮಾಲೋಚನೆ ಮೂಲಕ ಮಾಡಬೇಕಾಗಿರುತ್ತದೆ. ಈ ವರ್ಗಾವಣೆಯನ್ನು ಪ್ರತೀ ವರ್ಷದ ಸಾರ್ವತ್ರಿಕ ವರ್ಗಾವಣೆ ಸಂದರ್ಭದಲ್ಲಿ ಮಾಡಬೇಕಾಗಿದೆ. ಇಲಾಖೆಯಲ್ಲಿ ಖಾಲಿ ಇರುವ ನಿರ್ಣಾಯಕ (critical) ಹುದ್ದೆಗಳನ್ನು ಭರ್ತಿ ಮಾಡಲು ಅವಕಾಶವಿದೆ. ಆದರೆ ಇಲಾಖೆಯಲ್ಲಿ ತಜ್ಞರು ಹಾಗೂ ವೈದ್ಯಾಧಿಕಾರಿಗಳ ಕೊರತೆ ಇರುವುದರಿಂದ ಎಲ್ಲಾ ಹುದ್ದೆಗಳನ್ನು ಭರ್ತಿ ಮಾಡಲು ಸಾಧ್ಯವಾಗಿರುವುದಿಲ್ಲ. ಖಾಲಿ ಇರುವ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಕಾಲಕಾಲಕ್ಕೆ ಕ್ರಮ ಕೈಗೊಳ್ಳಲಾಗುತ್ತಿದೆ. ಖಾಲಿ ಇರುವ ತಜ್ಞ ವೈದ್ಯರನ್ನು ಎನ್.ಹೆಚ್.ಎಂ ಅಡಿಯಲ್ಲಿ ಬಿಡ್ ಮೂಲಕ ನೇಮಕಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ. ಜೊತೆಗೆ, ಗುತ್ತಿಗೆ ಆಧಾರದಲ್ಲಿ ಹಾಗೂ ಕರೆ ಆಧಾರದಲ್ಲಿ (on call basis) ಸಹ ನೇಮಕಾತಿ ಮಾಡಲು ಅವಕಾಶ ಕಲ್ಪಿಸಿದೆ. ಹಾಗೆಯೇ, ವಯೋನಿವೃತ್ತಿ ಹೊಂದಿದ ತಜ್ಞರು ಹಾಗೂ ವೈದ್ಯರನ್ನು 65 ವರ್ಷ ವಯಸ್ಸಿನವರೆಗೆ ಪ್ರತೀ ವರ್ಷ ನವೀಕರಿಸುವ ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದಲ್ಲಿ ಮರು ನೇಮಕಾತಿ ಮಾಡಿಕೊಳ್ಳಲು ಅವಕಾಶ ಕಲ್ಪಿಸಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ರಾಜ್ಯಾದ್ಯಂತ ಖಾಲಿ ಇರುವ ವಿವಿಧ ತಜ್ಞತೆಗಳ 1065 ತಜ್ಞ ವೈದ್ಯರು ಹಾಗೂ 365+111 (ಹೈ–ಕ) ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಭರ್ತಿ ಮಾಡಲು ನೇಮಕಾತಿ ಪ್ರಕ್ರಿಯೆಯು ಚಾಲನೆಯಲ್ಲಿರುತ್ತದೆ. ನೇಮಕಾತಿ ಪ್ರಕ್ರಿಯೆ ಅಂತಿಮಗೊಂಡ ನಂತರ ಸದರಿ ಹುದ್ದೆಗಳನ್ನು ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮ ವಹಿಸಲಾಗುತ್ತದೆ.

ಇಲಾಖೆಯಲ್ಲಿ ಖಾಲಿ ಇರುವ 177 ಪ್ರಥಮ ದರ್ಜೆ ಸಹಾಯಕರು ಮತ್ತು 143 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಅನುಮೋದನೆ ದೊರೆತಿದ್ದು, ಕೆಪಿಎಸ್‌ಸಿ ಮುಖಾಂತರ ಭರ್ತಿಮಾಡುವ ಸಲುವಾಗಿ ಪತ್ರ ಬರೆಯಲಾಗಿದೆ

ವಿಶೇಷ ನೇರ ನೇಮಕಾತಿ ಸಮಿತಿ ಮುಖಾಂತರ ಈ ಕೆಳಕಂಡ ಹುದ್ದೆಗಳಿಗೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ. ಪೊಲೀಸ್ ಪೂರ್ವಪರ /ಸಿಂಧುತ್ವ ವರದಿಗಳು ಸ್ವೀಕರಿಸಿದ ನಂತರ ನೇಮಕಾತಿ ಆದೇಶ ನೀಡಲಾಗುವುದು

| ಕ್ರಮ ಸಂಖ್ಯೆ | ಹುದ್ದೆ | ನೇಮಕಾತಿ ಸಂಖ್ಯೆ |
|---|---|---|
| 1 | ಕಿರಿಯ ಆರೋಗ್ಯ ಸಹಾಯಕರು | 465 |
| 2 | ನೇತ್ರಾಧಿಕಾರಿ/ನೇತ್ರ ಸಹಾಯಕರು | 44 |
| 3 | ವೈದ್ಯಕೀಯ ದಾಖಲಾತಿ ತಂತ್ರಜ್ಞ | 11 |
| 4 | ಕಿರಿಯ ವೈದ್ಯಕೀಯ ರೇಡಿಯಾಲಜಿಸ್ಟ್ ಟೆಕ್ನಾಲಜಿಸ್ಟ್ (ಕ್ಷ–ಕಿರಣ ತಂತ್ರಜ್ಞ) | 46 |

ಈ ಕೆಳಕಂಡ ಹುದ್ದೆಗೆ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿದ್ದು, ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸುವ ಹಂತದಲ್ಲಿದೆ.

| | | |
|---|---|---|
| 5 | ಡಯಟೀಷಿಯನ್ | 06 |
| 6 | ಕ್ಷೇತ್ರ ಆರೋಗ್ಯ ಶಿಕ್ಷಣಾಧಿಕಾರಿ (ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸುವ ಹಂತದಲ್ಲಿದೆ) | 62 |

ವಿಶೇಷ ನೇರ ನೇಮಕಾತಿ ಸಮಿತಿ ಮುಖಾಂತರ (981+889) ಒಟ್ಟು 1870 ಶುಶ್ರೂಷಕರ ಹುದ್ದೆಗಳನ್ನು ನೇರ ನೇಮಕಾತಿ ಮಾಡಲು ಅಧಿಸೂಚನೆ ಹೊರಡಿಸಲಾಗಿದೆ. ಸದರಿ ಅಧಿಸೂಚನೆಗಳಿಗೆ ಸಂಬಂಧಿಸಿದಂತೆ ಎನ್.ಆರ್.ಹೆಚ್.ಎಂ. ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಶುಶ್ರೂಷಕರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾವೆ ಹೂಡಿದ್ದು, ನೇಮಕಾತಿ ಪ್ರಕ್ರಿಯೆಗೆ ಯಥಾಸ್ಥಿತಿ ಕಾಪಾಡಲು/ತಡೆಯಾಜ್ಞೆ ಬಂದಿದ್ದು, ಮಧ್ಯಂತರ ಆದೇಶವನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

ವಿಶೇಷ ನೇರ ನೇಮಕಾತಿ ಸಮಿತಿ ಮುಖಾಂತರ 1659 ಕಿರಿಯ ಆರೋಗ್ಯ ಸಹಾಯಕರು(ಮಹಿಳೆ) ಹುದ್ದೆಗೆ ನೇರ ನೇಮಕಾತಿ ಮಾಡಲು ಅಧಿಸೂಚನೆ ಹೊರಡಿಸಲಾಗಿದೆ. ಸದರಿ ಅಧಿಸೂಚನೆಗೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾವೆ ಹೂಡಿದ್ದು, ಮಧ್ಯಂತರ ಆದೇಶವಾಗಿರುತ್ತದೆ. ಮಧ್ಯಂತರ ಆದೇಶವನ್ನು ತೆರವುಗೊಳಿಸಲು ಮತ್ತು ಕಂಡಿಕೆವಾರು ಉತ್ತರ ಮತ್ತು ಆಕ್ಷೇಪಣಾ ಹೇಳಿಕೆಯನ್ನು ಸಲ್ಲಿಸಲಾಗಿದೆ. ಸದರಿ ಹುದ್ದೆಗೆ ಮಧ್ಯಂತರ ಆದೇಶವಾಗುವ ಮೊದಲೇ ಮೂಲದಾಖಲಾತಿ ಪರಿಶೀಲನೆಯನ್ನು ನಡೆಸಿದ್ದು, ಮಧ್ಯಂತರ ಆದೇಶ ತೆರವಾದ ನಂತರ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು.

ನ್ಯಾಯಾಲಯಗಳಲ್ಲಿ ಪ್ರಕರಣಗಳು ಇತ್ಯರ್ಥಗೊಂಡ ನಂತರ ಸದರಿ ಆಸ್ಪತ್ರೆಗೆ ಖಾಲಿಯಿರುವ ಶುಶ್ರೂಷಕರನ್ನು ನೇಮಕಾತಿ ಮಾಡಲಾಗುವುದು.

## ಈ ಕೆಳಕಂಡ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಸರ್ಕಾರವು ಅನುಮತಿ ನೀಡಲಾಗಿದೆ.

| ವಿವರ | ಹುದ್ದೆಗಳ ಪದನಾಮ | ಒಟ್ಟು ಹುದ್ದೆಗಳು | ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಲಾಗಿರುವ ಹುದ್ದೆಗಳ ಸಂಖ್ಯೆ |
|---|---|---|---|
| ಸರ್ಕಾರದ ಅನುಮೋದನೆ ಮೇರೆಗೆ ಸದರಿ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಮಾಡಿಕೊಳ್ಳಲು ಆದೇಶ ನೀಡಲಾಗಿದೆ.<br>(ಖಾಲಿ ಇರುವ ಎಲ್ಲಾ ಗ್ರೂಪ್–ಡಿ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಅನುಮತಿಸಲಾಗಿದೆ) | ಕಿರಿಯ ವೈದ್ಯಕೀಯ ಪ್ರಯೋಗಾಶಾಲಾ ಟೆಕ್ನಾಲಜಿಸ್ಟ್ | 506 | 273 |
| | ಫಾರ್ಮಸಿಸ್ಟ್ | 510 | 225 |
| | ಎಲೆಕ್ಟ್ರೀಷಿಯನ್ | 07 | 0 |
| | ಸೋಷಿಯಲ್ ವರ್ಕರ್ | 09 | 0 |
| | ಡೆಂಟಲ್ ಮೆಕ್ಯಾನಿಕ್ | 04 | 0 |
| | ಗ್ರೂಪ್–ಡಿ | 10018 | 5043 |
| | ಒಟ್ಟು ಹುದ್ದೆಗಳು | 11054 | 5541 |